ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 17 ನೇ ಮಾರ್ಚ್, 2020

ಹಾಲು ಉತ್ಪಾದಕರ ಸಹಕಾರ ಸಂಘಗಳ ಬಗ್ಗೆ

ಶ್ರೀ ಎಂ. ಎ. ಗೋಪಾಲಸ್ವಾಮಿ(ಸ್ಥಳೀಯ ಸಂಸ್ಥೆಗಳ ಕ್ಷೇತ್ರ):-

1043 (1156) ಮಾನ್ಯ ಸಹಕಾರ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಹಾಲು ಉತ್ಪಾದಕರ ಸಹಕಾರ ಸಂಘಗಳು ಯಾವುವು ; ಮತ್ತು ಇದರಲ್ಲಿ ನೋಂದಾಯಿಸಿಕೊಂಡಿರುವ ಸದಸ್ಯರೆಷ್ಟು; ಇವುಗಳಲ್ಲಿ ಸ್ವಂತ ಕಟ್ಟಡಗಳನ್ನು ಹೊಂದಿರುವ ಸಂಘಗಳೆಷ್ಟು ; ಬಾಡಿಗೆ ಕಟ್ಟಡಗಳಲ್ಲಿ ಕಾರ್ಯನಿರ್ವಹಿಸುತ್ತಿರುವ ಸಂಘಗಳೆಷ್ಟು ; (ಪ್ರತಿ ಹಾಲು ಉತ್ಪಾದಕರ ಸಹಕಾರ ಸಂಘದ ಮಾಹಿತಿ ನೀಡುವುದು)

(ಆ) ಹಾಲು ಉತ್ಪಾದಕರ ಸಹಕಾರ ಸಂಘಗಳು ಸಾಮಾನ್ಯ ಸಭೆಗಳನ್ನು ನಡೆಸುವುದನ್ನು ಕಡ್ಡಾಯಗೊಳಿಸಲಾಗಿದೆಯೇ ; ಹಾಗಿದ್ದಲ್ಲಿ, ಈ ಸಂಬಂಧ ಸರ್ಕಾರವು ಹೊರಡಿಸಿರುವ ಆದೇಶ/ಸುತ್ತೋಲೆ ನೀಡುವುದು;

(ಇ) ಶ್ರವಣಬೆಳಗೊಳ ವಿಧಾನಸಭಾ ಕ್ಷೇತ್ರದ ವ್ಯಾಪ್ತಿಯಲ್ಲಿ 2019-2020ನೇ ಸಾಲಿನಲ್ಲಿ ಸಾಮಾನ್ಯ ಸಭೆಗಳನ್ನು ನಡೆಸಿರುವ ಹಾಲು ಉತ್ಪಾದಕರ ಸಹಕಾರ ಸಂಘಗಳೆಷ್ಟು ; (ದಾಖಲಾತಿ ಸಹಿತ ವಿವರವನ್ನು ನೀಡುವುದು)

(ಈ) ಹಾಲು ಉತ್ಪಾದಕರ ಸಹಕಾರ ಸಂಘಗಳು ರೈತರಿಂದ ಖರೀದಿಸುವ ಹಾಲಿಗೆ ಸರ್ಕಾರದಿಂದ ಬೆಂಬಲ ಬೆಲೆ/ಸಹಾಯಧನ ನೀಡಲಾಗುತ್ತಿದೆಯೇ ; ನೀಡುತ್ತಿದ್ದಲ್ಲಿ, ಪ್ರತಿ ಲೀಟರ್ಗೆ ಎಷ್ಟು ರೂಪಾಯಿ ಬೆಂಬಲ ಬೆಲೆ/ಸಹಾಯಧನ ನೀಡಲಾಗುತ್ತಿದೆ ; ಯಾವ ದಿನಾಂಕದವರೆಗೆ ಬೆಂಬಲ ಬೆಲೆ/ಸಹಾಯಧನ ನೀಡಲಾಗಿದೆ ? (ದಾಖಲಾತಿ ಸಹಿತ ವಿವರ ನೀಡುವುದು)